KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಮೇ ೧೨, ೨೦೧೧ (ವೈಶಾಖ ೨೨, ಶಕ ವರ್ಷ ೧೯೩೩) | ಸಂಚಿಕೆ ೧೯ |
| --- | --- | --- |

## ಭಾಗ – ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

**ಕನ್ನಡ ಸಂಸ್ಕೃತಿ ಮತ್ತು ವಾರ್ತಾ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಸಂವಾಪ್ರ 14 ಕೆಏಎಲ್ 2011, ಬೆಂಗಳೂರು, ದಿನಾಂಕ: 24–03–2011**

ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ ನಿಯಮಗಳು 2010ರ ಕರಡನ್ನು ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ, 2010ರ (2010ರ ಕರ್ನಾಟಕ ಅಧಿನಿಯಮ ಸಂಖ್ಯೆ 12) 25ನೇ ಪ್ರಕರಣದ (1)ನೇ ಉಪ–ಪ್ರಕರಣದ ಮೂಲಕ ಅಗತ್ಯಪಡಿಸಿದಂತೆ ದಿನಾಂಕ 30.12.2010ರ ಕರ್ನಾಟಕ ರಾಜ್ಯ ಪತ್ರದ ವಿಶೇಷ ಸಂಚಿಕೆಯ ಭಾಗ–4ಎ ರಲ್ಲಿ ಅಧಿಸೂಚನೆ ಸಂಖ್ಯೆ ಕಸಂವಾಪ್ರ 48 ಕೆಏಎಲ್ 2010, ದಿನಾಂಕ 02.12.2010 ರಲ್ಲಿ ಪ್ರಕಟಿಸಿ, ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ ಅಧಿಕೃತ ರಾಜ್ಯಪತ್ರದಲ್ಲಿ ಆ ಕರಡು ನಿಯಮಗಳು ಪ್ರಕಟವಾದ ದಿನಾಂಕದಿಂದ 15 ದಿನಗಳ ಒಳಗಾಗಿ ಆಕ್ಷೇಪಣೆ ಮತ್ತು ಸಲಹೆಗಳನ್ನು ಆಹ್ವಾನಿಸಿ ಪ್ರಕಟಿಸಿದ್ದರಿಂದ

ಮತ್ತು ಸದರಿ ರಾಜ್ಯ ಪತ್ರವನ್ನು ದಿನಾಂಕ 30.12.2010 ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿದುದರಿಂದ

ಮತ್ತು ಆ ಬಗ್ಗೆ ಯಾವುದೇ ಆಕ್ಷೇಪಣೆ ಮತ್ತು ಸಲಹೆಗಳು ಸ್ವೀಕೃತವಾಗಿಲ್ಲದಿರುವುದರಿಂದ

ಈಗ ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ 2010ರ (2010 ರ ಕರ್ನಾಟಕ ಅಧಿನಿಯಮ ಸಂಖ್ಯೆ 12) 25ನೇ ಪ್ರಕರಣದ (1) ಉಪ–ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಮುಂದಿನ ನಿಯಮಗಳನ್ನು ರಚಿಸುತ್ತದೆ ಎಂದರೆ:–

**ನಿಯಮಗಳು**

**ಅಧ್ಯಾಯ – 1**

**1. ಹೆಸರು ಮತ್ತು ಪ್ರಾರಂಭ.–** (1) ಈ ನಿಯಮವನ್ನು ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ ನಿಯಮಗಳು 2011 ಎಂದು ಕರೆಯತಕ್ಕದ್ದು.

(2) ಇವು ರಾಜ್ಯ ಪತ್ರದಲ್ಲಿ ಪ್ರಕಟಿಸಿದ ದಿನಾಂಕದಿಂದ ಜಾರಿಗೆ ಬರುತ್ತದೆ.

**2. ಪರಿಭಾಷೆಗಳು.–** (1) ಈ ನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯ ಪಡಿಸಿದ ಹೊರತು,–

(i) 'ಅಧಿನಿಯಮ' ಎಂದರೆ ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ, 2010;

(ii) 'ಪ್ರಕರಣ' ಎಂದರೆ ಅಧಿನಿಯಮದ ಪ್ರಕರಣ;

(iii) 'ನಮೂನೆ' ಎಂದರೆ ನಿಯಮಗಳಿಗೆ ಲಗತ್ತಿಸಲಾದ ನಮೂನೆ;

(iv) 'ಹಣಕಾಸು ವರ್ಷ ಅಥವಾ ವರ್ಷ' ಎಂದರೆ ಪ್ರತಿವರ್ಷ ಏಪ್ರಿಲ್ 1ನೇ ದಿನಾಂಕದಿಂದ ಪ್ರಾರಂಭವಾಗಿ ಮಾರ್ಚ್ 31ನೇ ದಿನಾಂಕಕ್ಕೆ ಕೊನೆಗೊಳ್ಳುವ ಒಂದು ವರ್ಷದ ಅವಧಿ;

(v) 'ಸಭೆ' ಎಂದರೆ ಪ್ರಾಧಿಕಾರದ ಸಭೆ ಅಥವಾ ಪ್ರಾಧಿಕಾರದ ಉಪ ಸಮಿತಿಯ ಸಭೆ.

(2) ಈ ನಿಯಮಗಳಲ್ಲಿ ಉಪಯೋಗಿಸಿದ, ಆದರೆ ಅರ್ಥ ವಿವರಣೆ ನೀಡಿರದ ಪದಗಳು ಹಾಗೂ ಪದಾವಳಿಗಳು ಅವುಗಳಿಗೆ ಅಧಿನಿಯಮದಲ್ಲಿ ಅನುಕ್ರಮವಾಗಿ ಕೊಟ್ಟ ಅರ್ಥವನ್ನೇ ಹೊಂದಿರತಕ್ಕದ್ದು.

## ಅಧ್ಯಾಯ – II

## ಸಾಮಾನ್ಯ ಉಪಬಂಧಗಳು

**3. ಅಧ್ಯಕ್ಷರ ಭತ್ಯೆಗಳು.–** ಕರ್ನಾಟಕ ಸಚಿವರ ವೇತನಗಳು ಮತ್ತು ಭತ್ಯೆಗಳ ಅಧಿನಿಯಮ 1956 (1957ರ ಅಧಿನಿಯಮ ಸಂಖ್ಯೆ 5) ರ ಅನ್ವಯ ಪ್ರಾಧಿಕಾರದ ಅಧ್ಯಕ್ಷರಿಗೆ ವೇತನ/ಭತ್ಯೆಗಳನ್ನು ನೀಡತಕ್ಕದ್ದು.

**4. ಸದಸ್ಯರ ಭತ್ಯೆಗಳು ಇತ್ಯಾದಿ.–** ಅಧ್ಯಕ್ಷನಲ್ಲದ ಪ್ರಾಧಿಕಾರದ ಪ್ರತಿಯೊಬ್ಬ ಸರ್ಕಾರೇತರ ಸದಸ್ಯರಿಗೆ,–

(1) ಪ್ರಾಧಿಕಾರದ ಸಭೆ, ಉಪ ಸಮಿತಿ ಸಭೆಗಳಿಗೆ ಹಾಜರಾಗುವುದಕ್ಕೆ ಕರ್ನಾಟಕ ಸಿವಿಲ್ ಸೇವಾ ನಿಯಮಗಳು, 1957ರ ಅನುಬಂಧ–Aರ ಅನ್ವಯ ಗ್ರೂಪ್ – ಎ ವರ್ಗದ ಅಧಿಕಾರಿಗಳಿಗೆ ಲಭ್ಯವಿರುವ ದರದಲ್ಲಿ ಪ್ರಯಾಣ ಭತ್ಯೆಯನ್ನು ಮತ್ತು ನಿಗದಿತ ದರದಲ್ಲಿ ಉಪಸ್ಥಿತಿ ಭತ್ಯೆಯನ್ನು ನೀಡತಕ್ಕದ್ದು.

(2) ಪ್ರಕರಣ 13ರ ಅನ್ವಯ ಪಡೆದುಕೊಂಡ ತಜ್ಞರ ಸೇವೆಗಾಗಿ ಅವರಿಗೆ ಸಂದಾಯ ಮಾಡತಕ್ಕ ಭತ್ಯೆಗಳು ಪ್ರಾಧಿಕಾರದ ಸದಸ್ಯರಿಗೆ ಸಂದಾಯ ಮಾಡತಕ್ಕಂಥ ದರದಲ್ಲಿರತಕ್ಕದ್ದು ಮತ್ತು ಅವರಿಗೆ ಸಂದಾಯವಾಗತಕ್ಕಂತಹ ಗೌರವಧನ ಆಗಿಂದಾಗ್ಗೆ ಪ್ರಾಧಿಕಾರವು ನಿಗಧಿಪಡಿಸಬಹುದಾದಂತಹ ದರದಲ್ಲಿರತಕ್ಕದ್ದು.

**5. ಕಾರ್ಯದರ್ಶಿಯ ಅಧಿಕಾರಗಳು ಮತ್ತು ಪ್ರಕಾರ್ಯಗಳು.–** ಕಾರ್ಯದರ್ಶಿಯು ತತ್ಕಾಲದಲ್ಲಿ ಜಾರಿಯಲ್ಲಿರುವ ಅಧಿನಿಯಮ ಅಥವಾ ಯಾವುದೇ ಕಾನೂನಿನಿಂದ ಅಥವಾ ಮೇರೆಗೆ ತನಗೆ ಪ್ರದತ್ತವಾದ ಅಥವಾ ವಹಿಸಿಕೊಟ್ಟಂತಹ ಅಧಿಕಾರಗಳನ್ನು ಚಲಾಯಿಸುವುದರ ಜೊತೆಗೆ ಮತ್ತು ಅಂಥ ಕರ್ತವ್ಯಗಳನ್ನು ನಿರ್ವಹಿಸುವುದರ ಜೊತೆಗೆ,–

(ಎ) ಪ್ರಾಧಿಕಾರದ ಪ್ರತಿಯೊಂದು ಸಭೆ ಮತ್ತು ಉಪಸಮಿತಿ ಸಭೆಗೆ ಹಾಜರಾಗತಕ್ಕದ್ದು;

(ಬಿ) ಪ್ರಾಧಿಕಾರದ ಪ್ರತಿಯೊಂದು ಸಭೆಯ ನಡವಳಿಕೆಯನ್ನು ಸಂಕ್ಷಿಪ್ತವಾಗಿ ದಾಖಲು ಮಾಡತಕ್ಕದ್ದು ಅಥವಾ ದಾಖಲು ಮಾಡುವಂತೆ ಮಾಡತಕ್ಕದ್ದು,

(ಸಿ) ಸಭೆಯಲ್ಲಿ ಮಂಡಿಸಲಾದ ಅಥವಾ ಯಾವುದೇ ಗೊತ್ತುವಳಿ ಅಥವಾ ಎತ್ತಲಾದ ಪ್ರಶ್ನೆಗಳ ಸಂಬಂಧದಲ್ಲಿ ತನ್ನ ಅಭಿಪ್ರಾಯವನ್ನು ಅಥವಾ ಯಾವುದೇ ಸ್ಪಷ್ಟೀಕರಣವನ್ನು ಒದಗಿಸತಕ್ಕದ್ದು;

(ಡಿ) ಪ್ರಾಧಿಕಾರದ ಎಲ್ಲ ಗೊತ್ತುವಳಿಗಳು ಮತ್ತು ಆದೇಶಗಳನ್ನು ಜಾರಿಗೊಳಿಸತಕ್ಕದ್ದು,

ಆದರೆ ಗೊತ್ತುವಳಿಗಳು ಅಥವಾ ಆದೇಶಗಳನ್ನು ಜಾರಿಗೆ ತರುವಲ್ಲಿ ಎಲ್ಲಿ ತೊಂದರೆಗಳು ಇರುತ್ತವೆಯೋ ಅಲ್ಲಿ ಅದನ್ನು ಪ್ರಾಧಿಕಾರಕ್ಕೆ ಅದರ ಮುಂದಿನ ಸಭೆಯಲ್ಲಿ ವರದಿ ಮಾಡತಕ್ಕದ್ದು ಮತ್ತು ಪ್ರಾಧಿಕಾರದ ನಿರ್ದೇಶನಗಳಿಗನುಸಾರವಾಗಿ ನಡೆಯತಕ್ಕದ್ದು,

(ಇ) ಪ್ರಾಧಿಕಾರದ ಎಲ್ಲ ಅಧಿಕಾರಿಗಳ ಮತ್ತು ಸಿಬ್ಬಂದಿಯವರ ಮೇಲ್ವಿಚಾರಣೆ ಮತ್ತು ನಿಯಂತ್ರಣ ಹೊಂದಿರತಕ್ಕದ್ದು,

(ಎಫ್) ಪ್ರಾಧಿಕಾರದ ಸಭೆಯ ವ್ಯವಹರಣೆಗಳಿಗೆ ಸಂಬಂಧಿಸಿದ ಎಲ್ಲಾ ಕಾಗದ ಪತ್ರಗಳು ಮತ್ತು ಪ್ರಾಧಿಕಾರದ ಮೇರೆಗೆ ಅಥವಾ ತನ್ನ ಸ್ವಂತ ಅಧಿಕಾರದ ಮೇರೆಗೆ ನಡೆಸಿದ ಪತ್ರ ವ್ಯವಹಾರಗಳ ಅಭಿರಕ್ಷಣೆಯನ್ನು ಹೊಂದಿರತಕ್ಕದ್ದು.

## ಅಧ್ಯಾಯ – III

**6. ಪ್ರಾಧಿಕಾರದ ನೌಕರರು.–** (1) ಪ್ರಾಧಿಕಾರದಲ್ಲಿರುವ ಮಂಜೂರಾದ ಪ್ರತಿಯೊಂದು ಹುದ್ದೆಯನ್ನು ಕರ್ನಾಟಕ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ಭಾರತದ ಇತರ ಯಾವುದೇ ರಾಜ್ಯ ಸರ್ಕಾರದ ನೌಕರರನ್ನು ಅಥವಾ ಯಾವುದೇ ಸ್ವಾಯತ್ತ ಸಂಸ್ಥೆಯ ನೌಕರರನ್ನು ಪ್ರತಿನಿಯೋಜಿಸುವ ಮೂಲಕ ಭರ್ತಿ ಮಾಡತಕ್ಕದ್ದು,

(2) ಆದರೆ, ಪ್ರಾಧಿಕಾರದ ಅಧ್ಯಕ್ಷರ ಆಪ್ತ ಶಾಖೆಗೆ, ಉಪನಿಯಮ (1)ರಲ್ಲಿ ತಿಳಿಸಿರುವಂತೆ ಪ್ರತಿನಿಯೋಜನೆ ಮೇರೆಗೆ ಅಧ್ಯಕ್ಷರ ಅಧಿಕಾರಾವಧಿಯನ್ನು ಮೀರದಂತೆ ನೇಮಿಸಿಕೊಳ್ಳತಕ್ಕದ್ದು. ಅಥವಾ ರಾಜ್ಯ ಸರ್ಕಾರವು ಘೋಷಿಸಲಾದ ಸ್ಥಾನಮಾನಗಳಿಗೆ ಅನುಗುಣವಾಗಿ ಸರ್ಕಾರವು ನಿಗಧಿಸಬಹುದಾದ ಮಾದರಿ ಮತ್ತು ಮಿತಿಗೆ ಒಳಪಟ್ಟು ಆಪ್ತ ಸಿಬ್ಬಂದಿಯನ್ನು ಗುತ್ತಿಗೆ ಆಧಾರದ ಮೇರೆಗೆ ಅಧ್ಯಕ್ಷರ ಅಧಿಕಾರಾವಧಿಯನ್ನು ಮೀರದಂತೆ ನೇಮಿಸಿಕೊಳ್ಳತಕ್ಕದ್ದು.

## ಅಧ್ಯಾಯ – IV

**7. ಪ್ರಾಧಿಕಾರದ ನಿಧಿ.–** (1) ಪ್ರಾಧಿಕಾರದ ನಿಧಿಗೆ ಸಂದಾಯವಾಗತಕ್ಕ ಎಲ್ಲ ಮೊತ್ತವನ್ನು ಪ್ರಾಧಿಕಾರವು ನಿಗಧಿಪಡಿಸಬಹುದಾದ ಅನುಸೂಚಿತ ಬ್ಯಾಂಕಿನಲ್ಲಿ ಪ್ರಾಧಿಕಾರದ ಲೆಕ್ಕಕ್ಕೆ ಜಮಾ ಮಾಡತಕ್ಕದ್ದು.

(2) ವಾರ್ಷಿಕ ಲೆಕ್ಕಗಳೂ ಸೇರಿದಂತೆ ಪ್ರಾಧಿಕಾರದ ನಿಧಿಯ ಆದಾಯ ಮತ್ತು ವೆಚ್ಚಗಳ ಲೆಕ್ಕಪತ್ರಗಳನ್ನು ಸರ್ಕಾರವು ನೀಡುವ ಯಾವುದೇ ನಿರ್ದೇಶನಕ್ಕೊಳಪಟ್ಟು, ರಾಜ್ಯ ಲೆಕ್ಕ ಪತ್ರ ಇಲಾಖೆಯವರ ಸಲಹೆ ಮೇರೆಗೆ ಕಾರ್ಯದರ್ಶಿಯವರು ಅಳವಡಿಸಿದಂಥ ರೀತಿಯಲ್ಲಿ ಮತ್ತು ಅಂಥ ನಮೂನೆಯಲ್ಲಿ ಇಡತಕ್ಕದ್ದು.

(3)ಪ್ರಾಧಿಕಾರದ ನಿಧಿಯಿಂದ ವೆಚ್ಚವನ್ನು ಸರ್ಕಾರವು ನಿರ್ದಿಷ್ಟಪಡಿಸಿದ ಸಂಬಂಧಪಟ್ಟ ನಿಯಮಗಳು ಮತ್ತು ಪ್ರಕ್ರಿಯೆಗಳಿಗನುಸಾರವಾಗಿ ಭರಿಸತಕ್ಕದ್ದು.

(4) ಪ್ರಾಧಿಕಾರವು ಸಾಧ್ಯವಾದಷ್ಟು ಮಟ್ಟಿಗೆ ಹಣಕಾಸು ವರ್ಷ ಮುಕ್ತಾಯವಾದ ತರುವಾಯ ನಡೆಯುವ ಮೊದಲನೇ ಸಭೆಯಲ್ಲಿ ಆ ವರ್ಷದ ಲೆಕ್ಕಪತ್ರಗಳನ್ನು ಅಂಗೀಕರಿಸತಕ್ಕದ್ದು, ಈ ವಾರ್ಷಿಕ ಲೆಕ್ಕಪತ್ರಗಳನ್ನು, ಅಳವಡಿಸಿಕೊಂಡ ನಮೂನೆಯಲ್ಲಿ ಪ್ರಾಧಿಕಾರವು ತಯಾರಿಸತಕ್ಕದ್ದು ಮತ್ತು ಅಂಗೀಕರಿಸತಕ್ಕದ್ದು.

(5) ಪ್ರಾಧಿಕಾರವು ತಾನು ಅಂತಿಮವಾಗಿ ವಾರ್ಷಿಕ ಲೆಕ್ಕ ಪತ್ರಗಳನ್ನು ಅಂಗೀಕರಿಸಿದ ಕೂಡಲೇ ವಾರ್ಷಿಕ ಲೆಕ್ಕಪತ್ರಗಳನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

## ಅಧ್ಯಾಯ – V

8. **ಪ್ರಾಧಿಕಾರದ ಆಯವ್ಯಯ.**– (1) ಪ್ರತಿಯೊಂದು ಹಣಕಾಸು ವರ್ಷದ ಆಯವ್ಯಯ ಅಂದಾಜುಗಳನ್ನು ಅನುಬಂಧದಲ್ಲಿ ಸೂಚಿಸಲಾದ ನಮೂನೆಯಲ್ಲಿ ತಯಾರಿಸಿ ಅವುಗಳನ್ನು ಸರ್ಕಾರದಿಂದ ನೇಮಿಸಲಾದ ಲೆಕ್ಕ ಪರಿಶೋಧಕರಿಂದ ಪರಿಶೋಧಿಸಿ ಅವುಗಳನ್ನು ಪ್ರಾಧಿಕಾರದ ಮುಂದೆ ಮಂಡಿಸತಕ್ಕದ್ದು, ಪ್ರಾಧಿಕಾರವು ಅದನ್ನು ಅನುಮೋದಿಸಿದ ತರುವಾಯ ಅವುಗಳನ್ನು ರಾಜ್ಯ ಸರ್ಕಾರ ನಿಗಧಿಪಡಿಸಿದ ದಿನಾಂಕದೊಳಗೆ ರಾಜ್ಯ ಸರ್ಕಾರಕ್ಕೆ ಅನುಮೋದನೆಗಾಗಿ ಕಳುಹಿಸಿಕೊಡತಕ್ಕದ್ದು. ಲೆಕ್ಕಪರಿಶೋಧಕರ ಹುದ್ದೆಗೆ ತಕ್ಕಂತೆ ಪರಿಶೋಧನಾ ಶುಲ್ಕವನ್ನು ನೀಡತಕ್ಕದ್ದು,

(2) ಸರ್ಕಾರ ಅನುಮೋದಿಸಿದ ಆಯವ್ಯಯ ಆ ಹಣಕಾಸು ವರ್ಷಕ್ಕಾಗಿ ಪ್ರಾಧಿಕಾರದ ಆಯವ್ಯಯವಾಗಿರತಕ್ಕದ್ದು ಮತ್ತು ಅದನ್ನು ಪ್ರಾಧಿಕಾರದ ಮೊಹರಿನೊಂದಿಗೆ ಮತ್ತು ಈ ಬಗ್ಗೆ ಕ್ರಮಬದ್ಧವಾಗಿ ಅಧಿಕೃತಗೊಳಿಸಿದ ಪ್ರಾಧಿಕಾರದ ಅಧಿಕಾರಿಗಳ ರುಜುವಿನೊಂದಿಗೆ ಹೊರಡಿಸತಕ್ಕದ್ದು,

(3)ಅನುಮೋದಿಸಿದ ಆಯವ್ಯಯದಲ್ಲಿ ಒದಗಿಸಿರುವ ಮೊತ್ತಕ್ಕಿಂತ ಹೆಚ್ಚಿನ ವೆಚ್ಚವನ್ನು ವ್ಯಯಿಸುವುದು ಅವಶ್ಯವಾದರೆ ಪ್ರಾಧಿಕಾರವು ಪ್ರಸ್ತಾವಿತ ವೆಚ್ಚದ ವಿವರಗಳನ್ನು ಕೂಡಲೇ ರಾಜ್ಯ ಸರ್ಕಾರಕ್ಕೆ ಒಪ್ಪಿಸತಕ್ಕದ್ದು.

## ಅಧ್ಯಾಯ – VI

9. **ವರದಿಗಳು.**–ಸರ್ಕಾರವು ಸೂಚಿಸಬಹುದಾದ ವಿಷಯಗಳನ್ನೊಳಗೊಂಡಂತೆ ಪ್ರಾಧಿಕಾರವು ಯೋಚಿಸಿದ, ಕೈಗೊಂಡ ಮತ್ತು ಪೂರ್ಣಗೊಳಿಸಿದ ಪ್ರಧಾನ ಕಾರ್ಯ ಚಟುವಟಿಕೆಗಳು, ಹಣಕಾಸು ಪರಿಸ್ಥಿತಿ, ಸಿಬ್ಬಂದಿ ಮತ್ತು ಅಧಿಕಾರಿಗಳು ಮತ್ತು ಇತರ ಅದೇ ಬಗೆಯ ವಿಷಯಗಳನ್ನೊಳಗೊಂಡ ವಾರ್ಷಿಕ ಆಡಳಿತ ವರದಿಯನ್ನು ಸಿದ್ಧಪಡಿಸಿ ಪ್ರಾಧಿಕಾರದ ಸಭೆಯ ಅನುಮೋದನೆ ಪಡೆಯತಕ್ಕದ್ದು ಮತ್ತು ಸರ್ಕಾರ ನಿಗಧಿಪಡಿಸಿದ ದಿನಾಂಕದೊಳಗೆ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸುಧಾಕರ ಶೆಟ್ಟಿ**

ಸರ್ಕಾರದ ಉಪ ಕಾರ್ಯದರ್ಶಿ,

ಕನ್ನಡ, ಸಂಸ್ಕೃತಿ ಮತ್ತು, ವಾರ್ತಾ ಇಲಾಖೆ.

## ಅನುಸೂಚಿ

ಕರ್ನಾಟಕ ಗಡಿ ಅಭಿವೃದ್ಧಿ ಪ್ರಾಧಿಕಾರ (ಆಯವ್ಯಯ ತ:ಖ್ತೆ) (ನಿಯಮ 8(1) ನೋಡಿ)

| ಲೆಕ್ಕ ಶೀರ್ಷಿಕೆ ಹಿಂದಿನ ವರ್ಷದ ( ) ವಾಸ್ತವಿಕ ವೆಚ್ಚ | ಪ್ರಸಕ್ತ ವರ್ಷಕ್ಕಾಗಿ (2009–10) ಮಂಜೂರಾದ ಅಂದಾಜು | ಪ್ರಸಕ್ತ ವರ್ಷಕ್ಕಾಗಿ (2009–10) ಪರಿಷ್ಕೃತ ಅಂದಾಜು ಮುಂದಿನ ವರ್ಷಕ್ಕೆ (2010–11) ಅಂದಾಜು | ಹೆಚ್ಚಳಕ್ಕೆ ಅಥವಾ ಇಟ್ಟಿರತಕ್ಕ ಕಾರಣ |
|---|---|---|---|

**ಆಯವ್ಯಯ ಸಾರಾಂಶ**

**ಭಾಗ – 1**

(1) ಪ್ರಾರಂಭಿಕ ಶಿಲ್ಕು

(2) ಸ್ವೀಕೃತಿಗಳು (ವಿವರಗಳನ್ನು ನೋಡಿ)

(3) ವೆಚ್ಚ

(4) ಅಂತಿಮ ಶಿಲ್ಕು

**ಭಾಗ – 2**

(1) ಪ್ರಾಧಿಕಾರದ ಅಧ್ಯಕ್ಷರು ಮತ್ತು ಸದಸ್ಯರಿಗೆ ಮಾಸಿಕ ಸಂಬಳ/ಭತ್ಯೆಗಳು

(2) ಕಾರ್ಯದರ್ಶಿಗೆ ಮಾಸಿಕ ಸಂಬಳ ಮತ್ತು ಭತ್ಯೆಗಳು

(3) ಇತರ ಅಧಿಕಾರಿಗಳು ಮತ್ತು ಸಿಬ್ಬಂದಿಗೆ ಮಾಸಿಕ ಸಂಬಳಗಳು ಮತ್ತು ಭತ್ಯೆಗಳು

(4) ಪ್ರವಾಸ ಭತ್ಯೆಗಳು

(5) ಸಾದಿಲ್ವಾರು

(6) ಪೀಠೋಪಕರಣಗಳು, ಸಾಧನ ಸಾಮಾಗ್ರಿಗಳು

(7) ಲೇಖನ ಸಾಮಾಗ್ರಿ/ಪುಸ್ತಕ/ರಿಜಿಸ್ಟರ್‌ಗಳು ಇತ್ಯಾದಿ ಖರೀದಿ

(8) ಬಾಡಿಗೆ

(9) ದೂರವಾಣಿ

(10) ಅಂಚೆ ವೆಚ್ಚ

(11) ಮುದ್ರಣ ವೆಚ್ಚಗಳು

(12) ಜಾಹೀರಾತುಗಳು

(13) ಲೆಕ್ಕ ಪರಿಶೀಲನೆ ವೆಚ್ಚಗಳು

(14) ಇತರೆ ಬಾಬ್ತುಗಳು

(15) ಯೋಜನೆಗಳ/ಕಾರ್ಯಕ್ರಮಗಳ ಮೇಲಿನ ವೆಚ್ಚಗಳು

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸುಧಾಕರ ಶೆಟ್ಟಿ**

ಸರ್ಕಾರದ ಉಪ ಕಾರ್ಯದರ್ಶಿ,

ಕನ್ನಡ, ಸಂಸ್ಕೃತಿ ಮತ್ತು, ವಾರ್ತಾ ಇಲಾಖೆ.

ಪಿ.ಆರ್.280

**ಶಿಕ್ಷಣ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಇಡಿ 65 ಎಲ್‌ಐಬಿ 2011, ಬೆಂಗಳೂರು, ದಿನಾಂಕ:30.03.2011**

ಕರ್ನಾಟಕ ಸಾರ್ವಜನಿಕ ಗ್ರಂಥಾಲಯಗಳು ಅಧಿನಿಯಮ 1965ರ ಕರ್ನಾಟಕ 10ನೇ ಅಧಿನಿಯಮ ಪ್ರಕರಣ 17ರ ಉಪಪ್ರಕರಣ (1) ಮತ್ತು (2)ರಲ್ಲಿನ ಪ್ರದತ್ತವಾದ ಅಧಿಕಾರದನ್ವಯ ಬೆಳಗಾವಿ ನಗರ ಗ್ರಂಥಾಲಯ ಪ್ರಾಧಿಕಾರಕ್ಕೆ ಈ ಕೆಳಕಂಡ ಸದಸ್ಯರನ್ನು ನಾಮಕರಣ ಮಾಡಿ ಆದೇಶಿಸಿದೆ.

| ಪ್ರಕರಣ | ವಿವರ | ಪದನಾಮ |
|---|---|---|
| 17(1)(ಎ):– ಮುನಿಸಿಪಲ್ ಕಾರ್ಪೋರೇಷನ್ನಿನ ಮೇಯರ್‌ರವರು ಅಥವಾ ನಗರ ಪಾಲಿಕೆ ಸಭೆಯ ಅಥವಾ ನಗರದ ಬೇರೆ ನಗರ ಪಾಲಿಕೆ ಸಂಸ್ಥೆಯವರು ಪ್ರಾಧಿಕಾರ ವರ್ಗದ ಅಧಿಕಾರ ಪ್ರಯುಕ್ತ ಸಭಾಪತಿಯಾಗಿರತಕ್ಕದ್ದು ; | ಮಹಾಪೌರರು, ಮಹಾನಗರ ಸಭೆ, ಬೆಳಗಾವಿ. | ಅಧ್ಯಕ್ಷರು |
| 17(1)(ಬಿ):– ರಾಜ್ಯ ಸರ್ಕಾರದವರಿಂದ ಅಧಿಕಾರ ಪ್ರಯುಕ್ತ (ಎಕ್ಸ್‌ಅಫಿಷಿಯೋ) ನೇಮಕ ಮಾಡಲ್ಪಟ್ಟ ನಗರದ ಮೊದಲ ದರ್ಜೆ ಕಾಲೇಜು ಒಂದರ ಪ್ರಿನ್ಸಿಪಾಲರು, (ಇವರು ಪ್ರಾಧಿಕಾರ ವರ್ಗದ ಉಪಸಭಾಪತಿಯಾಗಿ (ವೈಸ್‌ಚೇರ್ಮನರಾಗಿ) ಇರತಕ್ಕದ್ದು ; | ಪ್ರಾಂಶುಪಾಲರು, ಲಿಂಗರಾಜ ಮಹಾವಿದ್ಯಾಲಯ, ಬೆಳಗಾವಿ. | ಉಪಾಧ್ಯಕ್ಷರು |
| 17(1)(ಸಿ):– ನಗರದ ನಗರಪಾಲಿಕೆ ನಿಗಮದಿಂದ (ಮುನಿಸಿಪಲ್ ಕಾರ್ಪೋರೇಷನ್), ನಗರ ಪಾಲಿಕೆ ಸಭೆಯಿಂದ ಅಥವಾ ಇತರ ನಗರಪಾಲಿಕೆ ಸಂಸ್ಥೆಯಿಂದ ಅದರ ಸದಸ್ಯರುಗಳ ಪೈಕಿಯಿಂದ ಚುನಾಯಿಸಲ್ಪಡುವ ಇಬ್ಬರು ವ್ಯಕ್ತಿಗಳು; | ಮಹಾನಗರಪಾಲಿಕೆ ಬೆಳಗಾವಿಯಿಂದ ಚುನಾಯಿಸಿ ಕಳಿಸುವುದು. | ಸದಸ್ಯರು |
| 17(1)(ಡಿ):–ನಗರ ಸಹಾಯ ಪೋಷಿತ ಮಸ್ತಕ ಭಂಡಾರಗಳ ಸಂಬಂಧವಾದ ಆಡಳಿತ ಸಂಸ್ಥೆಗಳ ಸದಸ್ಯರುಗಳ ರಾಜ್ಯ ಸರ್ಕಾರದವರಿಂದ ನಾಮನಿರ್ದೇಶನ ಮಾಡಲ್ಪಟ್ಟ ಒಬ್ಬ ವ್ಯಕ್ತಿ ; | ಶ್ರೀ ಪ್ರಕಾಶ್ ಎಸ್.ಕುಲಕರ್ಣಿ, ಕಾರ್ಯಾಧ್ಯಕ್ಷರು, ಸರಸ್ವತಿ ವಾಚನಾಲಯ, ಶಹಾಪೂರ, ಬೆಳಗಾವಿ. | ಸದಸ್ಯರು |

| ಪ್ರಕರಣ | ವಿವರ | ಪದನಾಮ |
|---|---|---|
| 17(1)(ಇ):– ರಾಜ್ಯ ಸರ್ಕಾರದವರಿಂದ ಅಧಿಕಾರ ಪ್ರಯುಕ್ತ ನಾಮ ನಿರ್ದೇಶನ ಮಾಡಲ್ಪಟ್ಟ ನಗರದಲ್ಲಿನ ಒಂದು ಹೈಸ್ಕೂಲಿನ ಮುಖ್ಯೋಪಾಧ್ಯಾಯರು ; | ಶ್ರೀಮತಿ ಪಿ.ಪಿ.ಸ್ಯಾಮುಯಲ್, ಮುಖ್ಯೋಪಾಧ್ಯಾಯರು, ವನಿತಾ ವಿದ್ಯಾಲಯ, (ಕನ್ನಡ ಮತ್ತು ಮರಾಠಿ) ಬೆಳಗಾವಿ. | ಸದಸ್ಯರು |
| 17(1)(ಎಫ್):– ಮೈಸೂರು ಪುಸ್ತಕ ಭಂಡಾರ ಸಂಘದ ನಗರ ಶಾಖೆ ಯಾವುದಾದರೂ ಇದ್ದರೆ, ಅದರ ಸಮಿತಿಯಿಂದ ನಾಮ ನಿರ್ದೇಶನ ಮಾಡಲ್ಪಟ್ಟ ಒಬ್ಬ ವ್ಯಕ್ತಿ ; | ಅಸ್ತಿತ್ವದಲ್ಲಿರುವುದಿಲ್ಲ | –– |
| 17(1)(ಜಿ):– ನಗರದಲ್ಲಿ ಅಧಿಕಾರ ವ್ಯಾಪ್ತಿಯು ರಾಜ್ಯ ಸರ್ಕಾರದವರಿಂದ ಅಧಿಕಾರ ಪ್ರಯುಕ್ತ ನಾಮ ನಿರ್ದೇಶನ ಮಾಡಲ್ಪಟ್ಟ ವಿದ್ಯಾಭ್ಯಾಸ ಇಲಾಖೆಯ ಸಭಾಧಿಕಾರಿ ; | ಕ್ಷೇತ್ರ ಶಿಕ್ಷಣಾಧಿಕಾರಿಗಳು, ನಗರ ವಲಯ, ಬೆಳಗಾವಿ. | ಸದಸ್ಯರು |
| 17(1)(ಹೆಚ್):– ಸಾಮಾನ್ಯವಾಗಿ ನಗರದಲ್ಲೇ ವಾಸವಾಗಿರುವ ವ್ಯಕ್ತಿಗಳ ಪೈಕಿ ರಾಜ್ಯ ಸರ್ಕಾರದವರಿಂದ ನಾಮ ನಿರ್ದೇಶನ ಮಾಡಲ್ಪಟ್ಟ ಇಬ್ಬರು ವ್ಯಕ್ತಿಗಳು ಇರತಕ್ಕದ್ದು ; | 1) ಡಾ : ಗುರುದೇವಿ, ಹುಲೆಪ್ಪನವರ ಮಠ, ಲಿಂಗರಾಜ ಮಹಾವಿದ್ಯಾಲಯ ವಸತಿ ಗೃಹ, ಬೆಳಗಾವಿ.<br>2) ಶ್ರೀ ಎಂ.ಎಸ್.ಇಂಚಲ, ನಿವೃತ್ತ ಪ್ರಾಂಶುಪಾಲರು, ಸದಾಶಿವನಗರ, ಬೆಳಗಾವಿ. | ಸದಸ್ಯರು<br>ಸದಸ್ಯರು |
| 17(2) :– ಉಪನಿರ್ದೇಶಕರು, ಗ್ರಂಥಾಲಯ ಪ್ರಾಧಿಕಾರ ವರ್ಗದ ಮತ್ತು ಸದರಿ ಪ್ರಾಧಿಕಾರ ವರ್ಗದ ಸಮಿತಿಗಳ ಅಧಿಕಾರ ಪ್ರಯುಕ್ತ ಕಾರ್ಯದರ್ಶಿಯಾಗಿರತಕ್ಕುದು. | ಉಪನಿರ್ದೇಶಕರು, ನಗರ ಕೇಂದ್ರ ಗ್ರಂಥಾಲಯ, ಬೆಳಗಾವಿ. | ಸದಸ್ಯರು ಹಾಗೂ ಪದನಿಮಿತ್ತ ಕಾರ್ಯದರ್ಶಿಗಳು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎನ್.ಸೋಮಶೇಖರ್**

ಪಿ.ಆರ್.337

ಸರ್ಕಾರದ ಅಧೀನ ಕಾರ್ಯದರ್ಶಿ(ಆಡಳಿತ)

ಶಿಕ್ಷಣ ಇಲಾಖೆ

## ಅಲ್ಪಸಂಖ್ಯಾತರ ಕಲ್ಯಾಣ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: MWD 131 WES 2011 ಬೆಂಗಳೂರು, ದಿನಾಂಕ:26.04.2011**

ಮಾಹಿತಿ ಹಕ್ಕು ಅಧಿನಿಯಮ 2005 (ಕೇಂದ್ರದ 2005ನೇ ಅಧಿನಿಯಮ 22) ಇದರ 4ನೇ ಪ್ರಕರಣದ ಒಂದನೇ ಉಪ ಪ್ರಕರಣದ ಕಂಡಿಕೆ ಬಿ ಯ ಅನುಸಾರವಾಗಿ ಕರ್ನಾಟಕ ಸರ್ಕಾರದ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಮಾಹಿತಿಯನ್ನು ಸಾರ್ವಜನಿಕ ತಿಳುವಳಿಕೆಗಾಗಿ ಪ್ರಕಟಿಸಲಾಗಿದೆ.

ವಿವರವನ್ನು ಅನುಬಂಧದಲ್ಲಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಅಬ್ಬಾಸ್ ಷರೀಫ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ.

### ಅಧಿಸೂಚನೆ

**ಸಂಖ್ಯೆ: MWD 131 WES 2011 ಬೆಂಗಳೂರು, ದಿನಾಂಕ:21.04.2011**

ಮಾಹಿತಿ ಹಕ್ಕು ಅಧಿನಿಯಮ 2005 (ಕೇಂದ್ರದ 2005ನೇ ಅಧಿನಿಯಮ 22) ಇದರ 4ನೇ ಪ್ರಕರಣದ ಒಂದನೇ ಉಪ ಪ್ರಕರಣದ ಕಂಡಿಕೆ ಬಿ ಯ ಅನುಸಾರವಾಗಿ ಕರ್ನಾಟಕ ಸರ್ಕಾರದ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಮಾಹಿತಿಯನ್ನು ಸಾರ್ವಜನಿಕ ತಿಳುವಳಿಕೆಗಾಗಿ ಪ್ರಕಟಿಸಲಾಗಿದೆ.

1) ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ರಚನೆ ಅಧಿಕಾರ ಮತ್ತು ಕರ್ತವ್ಯಗಳು:

ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ರಚನೆ (organization chart) ಈ ಕೆಳಕಂಡಂತಿರುತ್ತದೆ.

ಎ) ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ರಚನೆ :

ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ




ಬಿ) ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ಪ್ರಕಾರ್ಯಗಳು ಮತ್ತು ಕರ್ತವ್ಯಗಳು ಈ ಕೆಳಕಂಡಂತೆ ತೋರಿಸಲಾಗಿದೆ.

**ಅ) ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ:– ಭಾಷಾ ಮತ್ತು ಮತೀಯ ಅಲ್ಪಸಂಖ್ಯಾತರು, ಅಲ್ಪಸಂಖ್ಯಾತರ ಕಲ್ಯಾಣ ಹಾಗೂ ಅಭಿವೃದ್ಧಿ ಶಾಖೆ.**

ಈ ಕೆಳಕಂಡ ವಿಷಯಗಳು ಶಾಖೆಯ ವ್ಯಾಪ್ತಿಯಲ್ಲಿ ಬರುತ್ತವೆ;

1) ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮಕ್ಕೆ ಸಂಬಂಧಪಟ್ಟ ವಿಷಯಗಳು;
2) ಭಾಷಾ ಮತ್ತು ಮತೀಯ ಅಲ್ಪಸಂಖ್ಯಾತರ ವಿಷಯಗಳು;
3) ಅಲ್ಪಸಂಖ್ಯಾತರ ಅಭಿವೃದ್ಧಿಗೆ ಸಂಬಂಧಪಟ್ಟ ವಿಷಯಗಳು;
4) ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗದ ವಿಷಯಗಳು;
5) ನಿರ್ದೇಶಕರು, ಅಲ್ಪಸಂಖ್ಯಾತರ ಇಲಾಖೆಗೆ ಸಂಬಂಧಪಟ್ಟ ವಿಷಯಗಳು.

**ಆ) ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ವಕ್ಫ್ ಮತ್ತು ಹಜ್ ಶಾಖೆ :–**

ರಾಜ್ಯದಲ್ಲಿ ವಿವಿಧ ವಕ್ಫ್ ಸಂಸ್ಥೆಗಳಾದ ಮಸೀದಿ, ದರ್ಗಾ, ಖಬ್ರಸ್ತಾನ್‌ಗಳಿಗೆ ಸಹಾಯ ಅನುದಾನ ನೀಡುವುದು.

1) ವಕ್ಫ್ ಆಸ್ತಿಗಳಿಗೆ ಸಂಬಂಧಪಟ್ಟಂತೆ, ನ್ಯಾಯಾಲಯ ಪ್ರಕರಣಗಳು ಹಾಗೂ ಇತರೆ ವಿಷಯಗಳು;
2) ವಕ್ಫ್ ಟ್ರಿಬ್ಯೂನಲ್ ಗಳಿಗೆ ಸಂಬಂಧಪಟ್ಟ ವಿಷಯಗಳು;
3) ವಕ್ಫ್ ಆಸ್ತಿಗಳನ್ನು ಅಭಿವೃದ್ಧಿಪಡಿಸುವ ಸಲುವಾಗಿ ಕರ್ನಾಟಕ ರಾಜ್ಯ ವಕ್ಫ್ ಕೌನ್ಸಿಲ್ ವತಿಯಿಂದ ಶಾದಿಮಹಲ್ ಹಾಗೂ ಶಾಪಿಂಗ್ ಕಾಂಪ್ಲೆಕ್ಸ್‌ಗಳ ನಿರ್ಮಾಣಕ್ಕಾಗಿ ಸಾಲ ಮಂಜೂರಾತಿಯ ವಿಷಯ;.
4) ಕೇಂದ್ರ ವಕ್ಫ್ ಕೌನ್ಸಿಲ್ ವಿಷಯಗಳು;
5) ರಾಜ್ಯದಲ್ಲಿನ ವಕ್ಫ್ ಆಸ್ತಿಗಳ ಸರ್ವೆ ಕಾರ್ಯದ ವಿಷಯಗಳು ಮೇಲ್ಕಂಡ ವಿಷಯಗಳಿಗೆ ಭರವಸೆಗಳು, ಆಡಿಟ್ ವಿಷಯ ಅರ್ಜಿ ಸಮಿತಿಯ ವಿಷಯಗಳು;

6) ಹಜ್ ಗೆ ಸಂಬಂಧಪಟ್ಟ ವಿಷಯಗಳು;

7) ಮೇಲ್ಕಂಡ ವಿಷಯಗಳಿಗೆ ಸಂಬಂಧಪಟ್ಟ ನ್ಯಾಯಾಲಯ ಪ್ರಕರಣಗಳು;

8) ಮೇಲ್ಕಂಡ ವಿಷಯಗಳಿಗೆ ಸಂಬಂಧಪಟ್ಟ ವಿಧಾನಸಭೆ; ವಿಧಾನ ಪರಿಷತ್ತಿನ ಪ್ರಶ್ನೆಗಳು ಅರ್ಜಿಗಳು ಮತ್ತು ಭರವಸೆ; ಆಡಿಟ್ ವಿಷಯಗಳು;

**II) ಅಧಿಕಾರಿಗಳು ಮತ್ತು ನೌಕರರ ಅಧಿಕಾರ ಮತ್ತು ಕರ್ತವ್ಯಗಳು :**

ಅ)ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ; ವಕ್ಫ್, ಭಾಷ ಮತ್ತು ಮತೀಯ ಅಲ್ಪಸಂಖ್ಯಾತರ ಕಲ್ಯಾಣ ಹಾಗೂ ಅಭಿವೃದ್ಧಿ ಶಾಖೆ :

| | | |
|---|---|---|
| 01 | ಬೆರಳಚ್ಚುಗಾರರು | ಹುದ್ದೆ ಖಾಲಿ ಇದೆ |
| 02 | ಕಿರಿಯ ಸಹಾಯಕರು | ಟಪಾಲುಗಳನ್ನು ಸ್ವೀಕರಿಸುವುದು, ಶಾಖಾ ದಿನಚರಿಯನ್ನು ನಿರ್ವಹಿಸುವುದು ಮತ್ತು ಸ್ವೀಕೃತಿಗಳನ್ನು ವಿಷಯ ನಿರ್ವಾಹಕರಿಗೆ ನೀಡುವುದು, ವಿಷಯವಾರು ರಿಜಿಸ್ಟರ್ ಗಳಲ್ಲಿ ಸಂಬಂಧಪಟ್ಟ ಕಡತಗಳ ಚಲನ ವಲನ ಬರೆಯುವುದು, ಮುಕ್ತಾಯಗೊಳಿಸಲಾದ ಕಡತಗಳನ್ನು ರೆಕಾರ್ಡ್ ಶಾಖೆಗಳಿಗೆ ಕಳುಹಿಸುವುದು, ಪತ್ರ ರವಾನೆ. |
| 03 | ಶೀಘ್ರಲಿಪಿಗಾರರು | ಅಧೀನ ಕಾರ್ಯದರ್ಶಿಯವರ ಶೀಘ್ರಲಿಪಿಗಾರರ ಹುದ್ದೆ ಖಾಲಿ ಇದೆ. |
| 04 | ಸಹಾಯಕರು–1 | ವಕ್ಫ್ ಶಾಖೆಗೆ ಸಂಬಂಧಪಟ್ಟಂತೆ ರಾಜ್ಯದಲ್ಲಿನ ವಿವಿಧ ವಕ್ಫ್ ಸಂಸ್ಥೆಗಳಾದ ಮಸೀದಿ, ದರ್ಗಾ, ಖಬ್ರಸ್ತಾನ್‌ಗಳಿಗೆ ಸಹಾಯಧನ ಮಂಜೂರು ಮಾಡುವುದು, ಕರ್ನಾಟಕ ವಕ್ಫ್ ಕೌನ್ಸಿಲ್, ಕೇಂದ್ರ ವಕ್ಫ್ ಕೌನ್ಸಿಲ್, ಖಾಜಿ ಆಕ್ಟ್‌ಗೆ ಸಂಬಂಧಪಟ್ಟ ವಿಷಯಗಳು, ವಿಧಾನಸಭೆ, ವಿಧಾನಪರಿಷತ್ತಿನ ಪ್ರಶ್ನೆಗಳು ನ್ಯಾಯಾಲಯ ಪ್ರಕರಣಗಳು ಸಂಬಂಧಪಟ್ಟ ಕಡತಗಳನ್ನು ನಿರ್ವಹಿಸುವುದು. |
| 05 | ಸಹಾಯಕರು–2 | ಭಾಷ ಮತ್ತು ಮತೀಯ ಅಲ್ಪಸಂಖ್ಯಾತರ ವಿಷಯಗಳು, ಕೇಂದ್ರ ಮತ್ತು ರಾಜ್ಯ ಅಲ್ಪಸಂಖ್ಯಾತರ ಆಯೋಗದ ವಿಷಯಗಳು ಮೇಲ್ಕಂಡ ವಿಷಯಕ್ಕೆ ಸಂಬಂಧಪಟ್ಟ ವಿಧಾನಸಭೆ, ವಿಧಾನಪರಿಷತ್ತಿನ ಪ್ರಶ್ನೆಗಳು, ಅರ್ಜಿಗಳು ಹಾಗೂ ಭರವಸೆಗಳ ವಿಷಯಗಳ ಕಡತಗಳನ್ನು ನಿರ್ವಹಿಸುವುದು. |
| 06 | ಹಿರಿಯ ಸಹಾಯಕ–1 | ಕರ್ನಾಟಕ ವಕ್ಫ್ ಮಂಡಳಿಗೆ ಸಂಬಂಧಪಟ್ಟ ಎಲ್ಲಾ ವಿಷಯಗಳು, ರಿವರ್ಸ್ ಆಫ್ ವಕ್ಫ್ ಪ್ರಾಪರ್ಟಿಗಳ ವಿಷಯ, ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮಕ್ಕೆ ಸಂಬಂಧಪಟ್ಟ ವಿಷಯ ನ್ಯಾಯಾಲಯ ಪ್ರಕರಣಗಳು, ವಿಧಾನಸಭೆ/ ವಿಧಾನಪರಿಷತ್ತಿನ ಪ್ರಶ್ನೆಗಳು, ಅರ್ಜಿಗಳು ಹಾಗೂ ಭರವಸೆಗಳು ಕಡತಗಳನ್ನು ನಿರ್ವಹಿಸುವುದು. |
| 07 | ಹಿರಿಯ ಸಹಾಯಕ–2 | ಅಲ್ಪಸಂಖ್ಯಾತರ ಕಲ್ಯಾಣ ವಿಷಯಗಳಾದ ಸಮುದಾಯ ಭವನಗಳಿಗೆ ಸಹಾಯಾನುಧಾನ, ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ ವಿಷಯ, ಅಲ್ಪಸಂಖ್ಯಾತರ ವಸತಿ ಶಾಲೆಗಳ ವಿಷಯ, ವಿಧಾನಸಭೆ:ವಿಧಾನಪರಿಷತ್ತಿನ ಪ್ರಶ್ನೆಗಳು, ನ್ಯಾಯಾಲಯ ಪ್ರಕರಣಗಳು, ಭರವಸೆಗಳು, ಅರ್ಜಿಗಳ ಕಡತಗಳನ್ನು ನಿರ್ವಹಿಸುವುದು. |
| 08 | ಶಾಖಾಧಿಕಾರಿ | ವಕ್ಫ್, ಭಾಷಾ ಮತ್ತು ಮತೀಯ ಅಲ್ಪಸಂಖ್ಯಾತರ ಕಲ್ಯಾಣ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಅಭಿವೃದ್ಧಿ ಶಾಖೆ, ವಿಷಯ ನಿರ್ವಾಹಕರು ಸಲ್ಲಿಸಿದ ಕಡತಗಳನ್ನು ಕೂಲಂಕಶವಾಗಿ ಪರಿಶೀಲಿಸಿ ಅಧೀನ ಕಾರ್ಯದರ್ಶಿಯವರಿಗೆ ಸಲ್ಲಿಸುವುದು. |

**ಆ) ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ (ಹಜ್)ಶಾಖೆ:**

| | | |
|---|---|---|
| 01 | ಬೆರಳಚ್ಚುಗಾರರು | ಹುದ್ದೆ ಇಲ್ಲ |
| 02 | ಕಿರಿಯ ಸಹಾಯಕರು | ಹಜ್ ಮತ್ತು ವಕ್ಫ್ ಶಾಖೆಗೆ ಒಬ್ಬರೇ ಕಿರಿಯ ಸಹಾಕರಿದ್ದು ಎರಡೂ ಶಾಖೆಯ ಕೆಲಸಕಾರ್ಯಗಳನ್ನು ನಿರ್ವಹಿಸುತ್ತಿದ್ದಾರೆ. |
| 03 | ಸಹಾಯಕರು | ಮುಸ್ಲಿಂ ಮಹಿಳಾ ಅಭ್ಯರ್ಥಿಗಳಿಗೆ ವಿದ್ಯಾರ್ಥಿವೇತನ ಹಾಗೂ ಸಾಲ ಮಂಜೂರಾತಿಯ ವಿಷಯಗಳು, ವಿಧಾನ ಪರಿಷತ್, ವಿಧಾನಸಭೆ ಪ್ರಶ್ನೆಗಳು, ಅರ್ಜಿಗಳು, ಭರವಸೆಗಳು, ನ್ಯಾಯಾಲಯ ಪ್ರಕರಣಗಳು ಕಡತಗಳನ್ನು ನಿರ್ವಹಿಸುವುದು. |
| 04 | ಸಹಾಯಕರು | ಹಜ್‌ಗೆ ಸಂಬಂಧಪಟ್ಟ ವಿಷಯಗಳು, ಆರ್ಥಿಕವಾಗಿ ಹಿಂದುಳಿದ ಮುಸ್ಲಿಂ ಮಹಿಳೆಯರಿಗೆ ಸಾಲ ಹಾಗೂ ಸಹಾಯಾನುದಾನ ಮಂಜೂರಾತಿ ವಿಷಯಗಳು, ನ್ಯಾಯಾಲಯ ಪ್ರಕರಣಗಳು ಮಾಹಿತಿ ಹಕ್ಕು ಕಾಯ್ದೆ ವಿಷಯಗಳು ಕಡತಗಳನ್ನು ನಿರ್ವಹಿಸುವುದು, ವಿಧಾನಸಭೆ: ವಿಧಾನ ಪರಿಷತ್ತು, ಭರವಸೆಗಳು, ಅರ್ಜಿಗಳು ಸಂಬಂಧಪಟ್ಟ ಕಡತಗಳನ್ನು ನಿರ್ವಹಿಸುವುದು. |
| 05 | ಶಾಖಾಧಿಕಾರಿಗಳು | ವಿಷಯ ನಿರ್ವಾಹಕರು ಸಲ್ಲಿಸಿದ ಕಡತಗಳನ್ನು ಪರಿಶೀಲಿಸಿ ಅಧೀನ ಕಾರ್ಯದರ್ಶಿರವರಿಗೆ ಸಲ್ಲಿಸುವುದು. |

**III) ಮೇಲ್ವಿಚಾರಣೆ ಮತ್ತು ಹೊಣೆಗಾರಿಕೆ ಮಾರ್ಗ ಒಳಗೊಂಡಂತೆ ನಿರ್ಣಯ ಕೈಗೊಳ್ಳುವ ಪ್ರಕ್ರಿಯೆಯಲ್ಲಿ ಅನುಸರಿಸುವ ಕಾರ್ಯವಿಧಾನ:**

ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯ ಎಲ್ಲಾ ಅಧಿಕಾರಿಗಳು/ನೌಕರರು, ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿಯಲ್ಲಿ ನಿಗಧಿಪಡಿಸಿದಂತೆ ಈ ಕೆಳಕಾಣಿಸಿದಂತೆ ಕಾರ್ಯನಿರ್ವಹಿಸುವುದು;

| | |
|---|---|
| ವಿಷಯ ನಿರ್ವಾಹಕ | ಸ್ವೀಕೃತಿಯಲ್ಲಿನ ಪ್ರಸ್ತಾವನೆಯ ಬಗ್ಗೆ ಹೊಸ ಕಡತ ತೆರೆಯುವುದು ಹಾಗೂ ಚಾಲ್ತಿಯಲ್ಲಿ ಕಡತ ತೆರೆದಿದ್ದಲ್ಲಿ ಸ್ವೀಕೃತಿಯನ್ನು ಆ ಕಡತದಲ್ಲಿ ಹಾಕಿ ನಿಯಮಾನುಸಾರ ಪರಿಶೀಲಿಸಿ ಶಾಖಾಧಿಕಾರಿಯವರಿಗೆ ಕಡತ ಮಂಡಿಸುವುದು. |
| ಶಾಖಾಧಿಕಾರಿ | ಸುಸಂಗತ ಸಕಲ ಪರಿಸ್ಥಿತಿಗಳೊಂದಿಗೆ ಪ್ರಸ್ತಾವನೆಯನ್ನು ಪರಿಶೀಲಿಸಿ ತೆಗೆದುಕೊಳ್ಳಬಹುದಾದ ಕ್ರಮದ ಬಗ್ಗೆ ತಿಳಿಸಿ ಅಧೀನ ಕಾರ್ಯದರ್ಶಿಗಳಿಗೆ ಕಡತವನ್ನು ಮಂಡಿಸುವುದು. |
| ಅಧೀನ ಕಾರ್ಯದರ್ಶಿ | ಪ್ರಸ್ತಾವಿಕ ಅನುಕ್ರಮದ ಸೂಕ್ತತೆ ಬಗ್ಗೆ ತಿಳಿಸುವುದು ಹಾಗೂ ಚಾಲ್ತಿಯಲ್ಲಿರುವ ನಿಯಮಗಳು ಅಥವಾ ಅಧಿನಿಯಮಗಳಾನುಸಾರವಾಗಿ ಅವುಗಳನ್ನು ವ್ಯಾಖ್ಯಾನಿಸುವುದು ಅಥವಾ ಪ್ರತ್ಯಾಯೋಜಿಸಿದ ಅಧಿಕಾರದನ್ವಯ ಸೂಕ್ತ ನಿರ್ಣಯವನ್ನು ತೆಗೆದುಕೊಳ್ಳುವುದು. |
| ಉಪ ಕಾರ್ಯದರ್ಶಿ | ಪ್ರಕರಣವನ್ನು ಎಲ್ಲಾ ದೃಷ್ಟಿಯಿಂದ ವಿಮರ್ಶೆ ಮಾಡುವುದು ಮತ್ತು ಪರಿಶೀಲನೆಯಲ್ಲಿರುವ ಪ್ರಸ್ತುತ ವಿಷಯದಲ್ಲಿ ಅಂತಿಮವಾಗಿ ಅಳವಡಿಸಬಹುದಾದ ಹಾಗೂ ಅನುಕ್ರಮದ ಕುರಿತು ಕಡತವನ್ನು ಪ್ರಧಾನ ಕಾರ್ಯದರ್ಶಿಗಳ ಅನುಮೋದನೆಗಾಗಿ ಮಂಡಿಸುವುದು ಅಥವಾ ಪ್ರತ್ಯಾಯೋಜಿಸಿದ ಅಧಿಕಾರದನ್ವಯ ಸೂಕ್ತ ನಿರ್ಣಯವನ್ನು ತೆಗೆದುಕೊಳ್ಳುವುದು. |
| ಸರ್ಕಾರದ ಪ್ರಧಾನ ಕಾರ್ಯದರ್ಶಿ | ಪ್ರತ್ಯಾಯೋಜಿಸಿದ ಅಧಿಕಾರದನ್ವಯ ಪ್ರಸ್ತಾವನೆಯ ಬಗ್ಗೆ ಕೈಗೊಳ್ಳಬೇಕಾದ ಅನುಕ್ರಮದ ಕುರಿತು ನಿರ್ಣಯಿಸುವುದು ಮತ್ತು ಅವಶ್ಯಕತೆಯಿದ್ದಲ್ಲಿ ಅಂತಿಮ ಆದೇಶಕ್ಕಾಗಿ ಇಲಾಖಾ ಸಚಿವರಿಗೆ ಕಡತವನ್ನು ಮಂಡಿಸುವುದು. |

**IV) ಪ್ರಕಾರ್ಯಗಳ ನಿರ್ವಹಣೆಗೆ ಅಳವಡಿಸಿಕೊಂಡಿರುವ ಸೂತ್ರಗಳು :**

| | |
|---|---|
| ದಲಾಯತ್ | ಅವರಿಗೆ ವಹಿಸಿರುವ ಕೆಲಸಗಳನ್ನು ಆಯಾಯ ದಿನದಂದೇ ವಹಿಸಲಾದ ಕಾರ್ಯವನ್ನು ನಿರ್ವಹಿಸುವುದು. |
| ಕಿರಿಯ ಸಹಾಯಕರು | ಅವರಿಗೆ ವಹಿಸಿರುವ ಕೆಲಸಗಳನ್ನು ಆಯಾ ದಿನದಂದು ನಿರ್ವಹಿಸುವುದು ಸ್ವೀಕೃತಿ ಹಾಗೂ ಕಡತಗಳನ್ನು ಸಂಬಂಧಪಟ್ಟವರಿಗೆ ಅಂದೇ ವಿತರಿಸುವುದು. |
| ವಿಷಯ ನಿರ್ವಾಹಕರು | ಕರ್ನಾಟಕ ಸರ್ಕಾರ ಸಚಿವಾಲಯದ ಕೈಪಿಡಿಯಂತೆ ಕಡತ/ಸ್ವೀಕೃತಿಗಳನ್ನು ಪರಿಶೀಲಿಸಿ ಮಂಡಿಸುವುದು. |
| ಶಾಖಾಧಿಕಾರಿ,<br>ಅಧೀನ ಕಾರ್ಯದರ್ಶಿ<br>ಉಪ ಕಾರ್ಯದರ್ಶಿ<br>ಪ್ರಧಾನ ಕಾರ್ಯದರ್ಶಿ | ಆದ್ಯತೆಯ ಮೇಲೆ ಕಾರ್ಯಗಳನ್ನು ನಿರ್ವಹಿಸುವುದು. |

**V) ಇಲಾಖೆಯಲ್ಲಿನ ನೌಕರರು ಪ್ರಕಾರ್ಯಗಳ ನಿರ್ವಹಣೆಗೆ ನಡೆಸುತ್ತಿರುವ ಇಲಾಖೆಯಲ್ಲಿರುವ /ಇಲಾಖೆಯ ಅಧೀನದಲ್ಲಿರುವ ನಿಯಮಗಳು, ಕೈಪಿಡಿಗಳು ಹಾಗೂ ದಾಖಲೆಗಳು :**

1) ಕರ್ನಾಟಕ ಸರ್ಕಾರ ಸಚಿವಾಲಯ ಕೈಪಿಡಿ.
2) ಕರ್ನಾಟಕ ಸರ್ಕಾರ ವ್ಯವಹಾರಗಳ ನಿರ್ವಹಣೆ ನಿಯಮಗಳು.
3) ಕರ್ನಾಟಕ ನಾಗರೀಕ ಸೇವಾ ನಿಯಮಗಳು
4) ಕರ್ನಾಟಕ ನಾಗರೀಕ ಸೇವಾ ವರ್ಗೀಕರಣ
(ನಿಯಂತ್ರಣ ಮತ್ತು ಅಪೀಲು ನಿಯಮಗಳು)
5) ಕರ್ನಾಟಕ ಆರ್ಥಿಕ ಸಂಹಿತೆ
6) ಕರ್ನಾಟಕ ಖಜಾನೆ ಸಂಹಿತೆ.

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, ಆರ್ಥಿಕ ಇಲಾಖೆ ಮತ್ತು ಯೋಜನಾ ಇಲಾಖೆಯ ಸುತ್ತೋಲೆ, ಅಧಿಕೃತಜ್ಞಾಪನಾ ಹಾಗೂ ಸರ್ಕಾರದ ಕಾರ್ಯಕಾರಿ ಆದೇಶಗಳು.

**VI) ಈ ಇಲಾಖೆಯು ಹೊಂದಿರುವ ಇಲಾಖೆಯ ಸ್ವಾಧೀನದಲ್ಲಿರುವ ದಸ್ತಾವೇಜುಗಳ ಪ್ರವರ್ಗಗಳ ಪಟ್ಟಿ.**

ಸಿಬ್ಬಂದಿಯ ಸ್ವೀಕೃತಿ ಮತ್ತು ರವಾನೆ ಸಂಬಂಧಿತ ರಿಜಿಸ್ಟರ್, ಚಲನವಲನ ರಿಜಿಸ್ಟರ್ ಸಿಬ್ಬಂದಿಯ ರಜೆಗಳಿಗೆ ಸಂಬಂಧಿಸಿ ರಿಜಿಸ್ಟರ್, ಮುದ್ದಾಂ ರಿಜಿಸ್ಟರ್, ರಕ್ಷಾ ಕಡತ (ಇಲಾಖೆಗಳ ವಿಷಯಗಳಿಗೆ ಸಂಬಂಧಿಸಿದಂತೆ ಸರ್ಕಾರದ ವತಿಯಿಂದ ಹೊರಡಿಸುವ ಆದೇಶಗಳು)

**VII) ಕಾರ್ಯನೀತಿಯನ್ನು ರೂಪಿಸಲು ಅಥವಾ ಅನುಷ್ಠಾನಗೊಳಿಸುವ ಬಗ್ಗೆ ಜನ ಪ್ರತಿನಿಧಿಗಳ ಜೊತೆ ಸಮಾಲೋಚಿಸಲು ಅಥವಾ ಪ್ರಾತಿನಿಧ್ಯಕ್ಕೆ ಇರುವ ವ್ಯವಸ್ಥೆಗಳ ವಿವರಗಳು:**

**ಭಾಷಾ ಮತ್ತು ಮತೀಯ ಅಲ್ಪಸಂಖ್ಯಾತರ ಶಾಖೆ:**

ಕಾರ್ಯನೀತಿಯನ್ನು ರೂಪಿಸಲು ಹಾಗೂ ಅನುಷ್ಠಾನಗೊಳಿಸುವ ಬಗ್ಗೆ ಜನಪ್ರತಿನಿಧಿ ಗಳನ್ನೊಳಗೊಂಡಂತೆ ಪ್ರಧಾನ ಮಂತ್ರಿಗಳ ಹೊಸ 15 ಅಂಶಗಳ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವ ಬಗ್ಗೆ ಜಿಲ್ಲಾ ಮಟ್ಟದ ಸ್ಥಾಯಿ ಸಮಿತಿಗಳನ್ನು ಹಾಗು ರಾಜ್ಯಮಟ್ಟದ ಸಮಿತಿಯನ್ನು ರಚಿಸಲು ಕ್ರಮಕೈಗೊಳ್ಳಲಾಗುತ್ತಿದೆ ಹಾಗೂ ಕರ್ನಾಟಕ ವಕ್ಫ್ ಕೌನ್ಸಿಲ್ ಸಮಿತಿಯನ್ನು ರಚಿಸಲಾಗಿದೆ.

**ಹಜ್ ಶಾಖೆ : –**

ಕಾರ್ಯನೀತಿಯನ್ನು ರೂಪಿಸಲು ಅಥವಾ ಅನುಷ್ಠಾನಗೊಳಿಸುವ ಬಗ್ಗೆ ಜನಪ್ರತಿನಿಧಿಗಳನ್ನೊಳಗೊಂಡಂತೆ ಕರ್ನಾಟಕ ರಾಜ್ಯ ವಕ್ಫ್ ಫೌಂಡೇಷನ್ ಫಾರ್ ವುಮೆನ್ಸ್ ರಚಿಸಲಾಗಿದೆ.

**VIII)** ಸಲಹೆಯನ್ನು ಪಡೆಯುವ ಸಂಬಂಧದಲ್ಲಿ ಎರಡು ಅಥವಾ ಅದಕ್ಕಿಂತ ಹೆಚ್ಚಿನ ವ್ಯಕ್ತಿಗಳು ಇರುವಂತೆ ರಚಿಸಿರುವ ಮಂಡಳಿಗಳು ಪರಿಷತ್ತುಗಳು, ಸಮಿತಿಗಳು ಮತ್ತು ಇತರೆ ಸಂಸ್ಥೆಗಳ ಪಟ್ಟಿ ಮತ್ತು ಇವುಗಳು ನಡೆಸುವ ಸಭೆಗಳು ಸಾರ್ವಜನಿಕರಿಗೆ ಮುಕ್ತವೇ ಅಥವಾ ಅಂತಹ ಸಭೆಗಳ ನಡವಳಿಗಳು ಸಾರ್ವಜನಿಕರಿಗೆ ಲಭ್ಯವಿರುವುದೆ.

1. ಕರ್ನಾಟಕ ರಾಜ್ಯ ವಕ್ಫ್ ಮಂಡಳಿ, ಬೆಂಗಳೂರು.
2. ಕರ್ನಾಟಕ ರಾಜ್ಯ ಹಜ್ ಸಮಿತಿ, ಬೆಂಗಳೂರು.
3. ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು.
4. ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗ, ಬೆಂಗಳೂರು.
5. ನಿರ್ದೇಶಕರು, ಅಲ್ಪಸಂಖ್ಯಾತರ ಕಲ್ಯಾಣ ನಿರ್ದೇಶನಾಲಯ, ಬೆಂಗಳೂರು.

ಆಯಾಯ ನಿಗಮ ಸಂಸ್ಥೆಗಳಲ್ಲಿ ಲಭ್ಯವಿರುವುದಿಲ್ಲ.

**IX) ಅಧಿಕಾರಿಗಳ ಮತ್ತು ನೌಕರರ ನಿರ್ದೇಶಿಕೆ (Directory) :**

ಅಧಿಕಾರಿಗಳ ಮತ್ತು ನೌಕರರ ನಿರ್ದೇಶಿಕೆಯು ಈ ಕೆಳಕಂಡಂತಿದೆ:

| ಕ್ರ. ಸಂ | ಅಧಿಕಾರಿ/ನೌಕರರ ಹೆಸರು ಮತ್ತು ಹುದ್ದೆ | ದೂರವಾಣಿ |
|---|---|---|
| 01 | ಶ್ರೀ ಮೊಹಮ್ಮದ್ ಸನಾವುಲ್ಲಾ,<br>ಸರ್ಕಾರದ ಪ್ರಧಾನ ಕಾರ್ಯದರ್ಶಿ,<br>ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ,<br>ಕೊಠಡಿ ಸಂಖ್ಯೆ: 204, 2ನೇ ಮಹಡಿ,<br>ವಿಕಾಸ ಸೌಧ, ಬೆಂಗಳೂರು | 22200623 |
| 02 | ಶ್ರೀ ಕೆ. ನಾರಾಯಣಮೂರ್ತಿ,<br>ಪತ್ರಾಂಕಿತ ಸಹಾಯಕ | 22034440 |
| 03 | ಶ್ರೀಮತಿ ನೂರ್ ಹಜೀರಾ,<br>ಕಿರಿಯ ಸಹಾಯಕಿ | 22034440 |
| 04 | ಶ್ರೀ ಅಬ್ಬಾಸ್ ಷರೀಫ್,<br>ಸರ್ಕಾರದ ಉಪ ಕಾರ್ಯದರ್ಶಿ(ಪ್ರಭಾರ),<br>ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ,<br>ಕೊಠಡಿ ಸಂಖ್ಯೆ:215, 2ನೇ ಮಹಡಿ,<br>ವಿಕಾಸ ಸೌಧ, ಬೆಂಗಳೂರು | 22034469 |
| 06 | ಶ್ರೀಮತಿ ಪದ್ಮಾವತಮ್ಮ<br>ಶೀಘ್ರಲಿಪಿಗಾರರು, | 22034480 |
| 07 | ಕಿರಿಯ ಸಹಾಯಕರು, ಹುದ್ದೆ ಖಾಲಿ ಇದೆ | 22034480 |
| 08 | ದಲಾಯತ್, (ನಿಯೋಜನೆ ಮೇಲೆ) | 22034480 |

**ಅಲ್ಪ ಸಂಖ್ಯಾತರ ಕಲ್ಯಾಣ ಇಲಾಖೆ: ವಕ್ಫ್ ಭಾಷ ಮತ್ತು ಮತೀಯ ಅಲ್ಪಸಂಖ್ಯಾತರ ಕಲ್ಯಾಣ ಅಭಿವೃದ್ಧಿ ಶಾಖೆ:**

| ಕ್ರ. ಸಂ | ಅಧಿಕಾರಿ/ನೌಕರರ ಹೆಸರು ಮತ್ತು ಹುದ್ದೆ | ದೂರವಾಣಿ |
|---|---|---|
| 01 | ಶ್ರೀ ಅಬ್ಬಾಸ್ ಷರೀಫ್,<br>ಸರ್ಕಾರದ ಅಧೀನ ಕಾರ್ಯದರ್ಶಿ | 22034474 |
| 02 | ಶ್ರೀಮತಿ ಶಕುಂತಲ,<br>ಶೀಘ್ರಲಿಪಿಗಾರರು | 22034474 |
| 03 | ಶ್ರೀ ಹಿದಾಯತ್ತುಲ್ಲಾ, ಶಾಖಾಧಿಕಾರಿ | 22034479 |
| 04 | ಶ್ರೀ ರಾಧಕೃಷ್ಣ ಕೆ., ಹಿರಿಯ ಸಹಾಯಕರು | 22034479 |
| 05 | ಶ್ರೀ ಬಿ.ಎಸ್.ನರೇಂದ್ರ,<br>ಹಿರಿಯ ಸಹಾಯಕರು | 22034479 |

| ಕ್ರ. ಸಂ | ಅಧಿಕಾರಿ/ನೌಕರರ ಹೆಸರು ಮತ್ತು ಹುದ್ದೆ | ದೂರವಾಣಿ |
|---|---|---|
| 06 | ಶ್ರೀ ರಾಘವೇಂದ್ರ,ಎಸ್.ಆರ್. ಸಹಾಯಕರು | 22034479 |
| 07 | ಶ್ರೀ ಅಬ್ಬಾಸ್, ಕಿರಿಯ ಸಹಾಯಕರು | 22034479 |
| 08 | ದಲಾಯತ್ ಖಾಲಿ ಇದೆ. ಈಗಿರುವ ದಲಾಯತ್ ನಿಯೋಜನೆ ಮೇಲೆ ಕೆಲಸ ಮಾಡುತ್ತಿದ್ದಾರೆ. | 22034479 |

**ಹಜ್ ಶಾಖೆ:**

| ಕ್ರ. ಸಂ | ಅಧಿಕಾರಿ/ನೌಕರರ ಹೆಸರು ಮತ್ತು ಹುದ್ದೆ | ದೂರವಾಣಿ |
|---|---|---|
| 01 | ಶ್ರೀ ಅಬ್ಬಾಸ್ ಷರೀಫ್, ಸರ್ಕಾರದ ಅಧೀನ ಕಾರ್ಯದರ್ಶಿ | 22034474 |
| 02 | ಶ್ರೀಮತಿ ಸಾಯಿದಾ ಬಾನು, ಶಾಖಾಧಿಕಾರಿ | 22034477 |
| 03 | ಶ್ರೀಮತಿ ಬೀನಾಕುಮಾರಿ, ಹಿರಿಯ ಸಹಾಯಕಿ | 22034477 |
| 04 | ಶ್ರೀ ಎಸ್. ಎಜಾಸ್ ಪಾಷ, ಸಹಾಯಕರು | 22034477 |
| 05 | ಶ್ರೀ ಬಿ.ಬಿ. ಬಿಜಾಪುರ್, ಸಹಾಯಕರು | 22034477 |
| 06 | ಶ್ರೀ ಅಬ್ಬಾಸ್, ಕಿರಿಯ ಸಹಾಯಕರು | 22034477 |
| | ದಲಾಯತ್ ಹುದ್ದೆ ಖಾಲಿ ಇದೆ. ಈಗಿರುವ ದಲಾಯತ್ ನಿಯೋಜನೆ ಮೇಲೆ ಕೆಲಸ ಮಾಡುತ್ತಿದ್ದಾರೆ. | 22034477 |

**X) ವಿನಿಮಯ:ನಿಬಂಧನೆಗಳಲ್ಲಿ ಉಪಬಂಧಿಸಿದಂತೆ ಪರಿಹಾರ ಕ್ರಮಗಳನ್ನು ಒಳಗೊಂಡಂತೆ ಅಧಿಕಾರಿಗಳು ಮತ್ತು ನೌಕರರು ಪಡೆಯುತ್ತಿರುವ ಮಾಸಿಕ ವೇತನದ ವಿವರಗಳು :**

| ಕ್ರ. ಸಂ | ಅಧಿಕಾರಿ/ನೌಕರರ ಹೆಸರು ಮತ್ತು ಹುದ್ದೆ | ಮೂಲವೇತನ |
|---|---|---|
| 01 | ಸರ್ಕಾರದ ಉಪ ಕಾರ್ಯದರ್ಶಿ | ಹುದ್ದೆ ಖಾಲಿ ಇದೆ |
| 02 | ಶ್ರೀ ಅಬ್ಬಾಸ್ ಷರೀಫ್, ಸರ್ಕಾರದ ಅಧೀನ ಕಾರ್ಯದರ್ಶಿ | 16,700/– |
| 03 | ಶ್ರೀ ಹಿದಾಯತ್ತುಲ್ಲ ಕೆ.ಎ, ಶಾಖಾಧಿಕಾರಿ | 11,700/– |
| 04 | ಶ್ರೀಮತಿ ಸಯೀದಾ ಬಾನು, ಶಾಖಾಧಿಕಾರಿ | 14,050/– |
| 05 | ಶ್ರೀ ರಾಧಾಕೃಷ್ಣ ಕೆ. ಹಿರಿಯ ಸಹಾಯಕರು | 14,700/– |
| 06 | ಶ್ರೀ ನರೇಂದ್ರ, ಹಿರಿಯ ಸಹಾಯಕರು | 12,000/– |
| 07 | ಶ್ರೀಮತಿ ಶಕುಂತಲ, ಶೀಘ್ರಲಿಪಿಗಾರ್ತಿ | 12,650/– |
| 08 | ಶ್ರೀಮತಿ ಪದ್ಮಾವತಮ್ಮ, ಶೀಘ್ರಲಿಪಿಗಾರ್ತಿ | 14,050/– |
| 09 | ಶ್ರೀಮತಿ ಬೀನಾ ಕುಮಾರಿ, ಹಿರಿಯ ಸಹಾಯಕಿ | 11,400/– |
| 10 | ಶ್ರೀ ಬಿ.ವಿ. ಬಿಜಾಪುರ್, ಸಹಾಯಕರು | 10,250/– |
| 11 | ಶ್ರೀ ಎಜಾಸ್ ಪಾಷ, ಸಹಾಯಕರು | 8,400/– |
| 12 | ಶ್ರೀ ರಾಘವೇಂದ್ರ.ಎಸ್.ಆರ್ | 8,200/– |
| 13 | ಶ್ರೀ ಅಬ್ಬಾಸ್, ಕಿರಿಯ ಸಹಾಯಕರು | 6,000/– |

**XI) 2009–10ನೇ ಸಾಲಿನ ಆಯವ್ಯಯದಲ್ಲಿ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ ಈ ಕೆಳಕಂಡ ಯೋಜನೆಗಳಿಗೆ ಹಣ ಮಂಜೂರಾದ ಮೊತ್ತ.**

(ರೂ.ಲಕ್ಷಗಳಲ್ಲಿ)

| ಕ್ರ. ಸಂ | ಯೋಜನೆಯ ಹೆಸರು | 2010–11ನೇ ಸಾಲಿನ ಆಯವ್ಯಯದಲ್ಲಿ ಮಂಜೂರಾದ ಮೊತ್ತ |
|---|---|---|
| 01 | ವಕ್ಫ್ ಮತ್ತು ಇತರೆ ಕಾರ್ಯಕ್ರಮಗಳಿಗೆ | 1636.66 |

| | | |
|---|---|---|
| 02 | ಕರ್ನಾಟಕ ಅಲ್ಪಸಂಖ್ಯಾತರ ಆಯೋಗ | 124.08 |
| 03 | ನಿರ್ದೇಶಕರು, ಅಲ್ಪಸಂಖ್ಯಾತರ ಕಲ್ಯಾಣ ನಿರ್ದೇಶನಾಲಯ | 16900.00 |
| 04 | ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ | 6000.00 |

**XII) ಹಣ ಹಂಚಿಕೆ ಮಾಡಿದ ವಿವರಗಳನ್ನೊಳಗೊಂಡಂತೆ ಕಾರ್ಯಕ್ರಮಗಳ ಫಲಾನುಭವಿಗಳ ಹಾಗೂ ಸಹಾಯಧನ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುವ ವಿಧಾನ :**

ವಕ್ಫ್ ಭಾಷ ಮತ್ತು ಮತೀಯ ಅಲ್ಪಸಂಖ್ಯಾತರ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಅಭಿವೃದ್ಧಿ ಶಾಖೆಯ ಆಡಳಿತ ವ್ಯಾಪ್ತಿಗೆ ಬರುವ ಕರ್ನಾಟಕ ರಾಜ್ಯ ವಕ್ಫ್ ಮಂಡಳಿ, ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ, ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಕಲ್ಯಾಣ ನಿರ್ದೇಶನಾಲಯ, ಕರ್ನಾಟಕ ರಾಜ್ಯ ಅಲ್ಪಸಂಖ್ಯಾತರ ಆಯೋಗ ಇವುಗಳು ರಾಜ್ಯ ಸರ್ಕಾರದಿಂದ ಅನುಮೋದಿತ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿದ್ದು, ಈ ಬಗ್ಗೆ ಮಾಹಿತಿ ಸಂಬಂಧಪಟ್ಟ ನಿಗಮಗಳಲ್ಲಿ ದೊರೆಯುತ್ತವೆ.

ಹಜ್ ಶಾಖೆಯ ಆಡಳಿತ ವ್ಯಾಪ್ತಿಗೆ ಬರುವ ಕರ್ನಾಟಕ ರಾಜ್ಯ ಹಜ್ ಸಮಿತಿ ಸಂಸ್ಥೆಯು ರಾಜ್ಯ ಸರ್ಕಾರದಿಂದ ಅನುಮೋದಿತ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿದ್ದು, ಈ ಬಗ್ಗೆ ಮಾಹಿತಿಯು ಸಂಬಂಧಪಟ್ಟ ಸಂಸ್ಥೆಯಲ್ಲಿ ದೊರೆಯುತ್ತದೆ.

XIII) ರಿಯಾಯಿತಿಗಳು ಟಿಪ್ಪಣಿ ಪತ್ರಗಳು ಅಥವಾ ಅಧಿಕಾರಪತ್ರ ಮಂಜೂರಾತಿಗಳನ್ನು ಪಡೆದವರ ವಿವರಗಳು:

XIV) ವಿಭಾಗದಲ್ಲಿ ದೊರೆಯುವ ಅಥವಾ ಹೊಂದಿರುವ ವಿದ್ಯುನ್ಮಾನ ರೂಪಕ್ಕೆ ಇಳಿಸಿರುವ ಮಾಹಿತಿಗಳ ವಿವರಗಳು:

ಯಾವುದೂ ಇಲ್ಲ

XV) ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರು, ಪದನಾಮ ಮತ್ತು ಇತರೆ ಮಾಹಿತಿಗಳು :

ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರು ಮತ್ತು ಪದನಾಮ

| ಸಾರ್ವಜನಿಕ ಮಾಹಿತಿ ಅಧಿಕಾರಿ | ಸಹಾಯಕ ಮಾಹಿತಿ ಅಧಿಕಾರಿ | ಮೇಲ್ಮನವಿ ಪ್ರಾಧಿಕಾರ |
|---|---|---|
| ಶ್ರೀ ಅಬ್ಬಾಸ್ ಷರೀಫ್<br>ಸರ್ಕಾರದ ಅಧೀನ ಕಾರ್ಯದರ್ಶಿ,<br>ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ<br>ನಂ.215, 2ನೇ ಮಹಡಿ,<br>ವಿಕಾಸ ಸೌಧ, ಬೆಂಗಳೂರು–01<br>ದೂರವಾಣಿ–2203 4474 | ಶ್ರೀ ಹಿದಾಯತ್ತುಲ್ಲ ಕೆ.ಎ<br>ಶಾಖಾಧಿಕಾರಿಗಳು,<br>ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ (ವಕ್ಫ್)<br>ನಂ.215,2ನೇ ಮಹಡಿ,<br>ವಿಕಾಸ ಸೌಧ, ಬೆಂಗಳೂರು<br>ದೂರವಾಣಿ–22034477 | ಶ್ರೀ ಅಹಮದ್ ಎ.ಮುಖ್ತರ್<br>ಸರ್ಕಾರದ ಉಪಕಾರ್ಯದರ್ಶಿರವರು ಜಂಟಿ ಕಾರ್ಯದರ್ಶಿಯಾಗಿ ಮುಂಬಡ್ತಿ ಪಡೆದು ಕೃಷಿ ಇಲಾಖೆಗೆ ನಿಯುಕ್ತಿಗೊಂಡಿರುವುದರಿಂದ ಈ ಹುದ್ದೆಯನ್ನು ನಿಯುಕ್ತಿಗೊಳಿಸುವವರೆಗೆ<br>ಶ್ರೀ ಅಬ್ಬಾಸ್ ಷರೀಫ್ ಸರ್ಕಾರದ ಅಧೀನ ಕಾರ್ಯದರ್ಶಿ, ಉಪಕಾರ್ಯದರ್ಶಿಯವರ ಹೆಚ್ಚಿನ ಕಾರ್ಯಬಾರವನ್ನು ನಿರ್ವಹಿಸುತ್ತಿರುವರು<br>ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ<br>ನಂ.215, 2ನೇ ಮಹಡಿ, ವಿಕಾಸ ಸೌಧ, ಬೆಂಗಳೂರು.<br>ದೂರವಾಣಿ–22034469 |
| | ಶ್ರೀಮತಿ ಸಾಯಿದಾ ಬಾನು,<br>ಶಾಖಾಧಿಕಾರಿಗಳು<br>ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ (ಹಜ್)ನಂ.215,2ನೇ ಮಹಡಿ,<br>ವಿಕಾಸ ಸೌಧ, ಬೆಂಗಳೂರು<br>ದೂರವಾಣಿ–22034979 | |

**ನಿಗದಿಪಡಿಸಲಾದ ಇತರೆ ಯಾವುದೇ ಮಾಹಿತಿಗಳು :**

ಯಾವುದೂ ಇಲ್ಲ.

**ಅಬ್ಬಾಸ್ ಷರೀಫ್**

ಪಿ.ಆರ್.373

ಸರ್ಕಾರದ ಅಧೀನ ಕಾರ್ಯದರ್ಶಿ,

ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ.

**HEALTH AND FAMILY WELFARE SECRETARIAT**

**NOTIFICATION**

**No: HFW 82 MPS 2011, Bangalore, Dated 08-04-2011**

**Sub:** Determination of intake and publication of the seat matrix of Post Graduate Medical Degree and Diploma Courses and Dental Degree courses in Government and Private Medical/Dental Colleges for the academic year 2011-12.

1. In the Notification No. HFW 399 MPS 2005, dated 08-12-2006 Government have promulgated in Karnataka Gazette dated 08-12-2006 the Karnataka Conduct of Entrance Test for Selection and Admission to Post Graduate Medical and Dental Degree and Diploma Courses Rules, 2006 and authorize Rajiv Gandhi University of Health Science to conduct Entrance Test for Medical and Dental Degree and Diploma seats in Government and Private Medical/Dental Colleges in the State.

2. The Director of Medical Education in her letter No:PGS/54/2011-12, dated 08.04.2011 has sent proposal for notification of seat matrix for the year 2011-12 for PG Degree/Diploma in Medical Sciences in Government Autonomous Institution/the Government seats in Private Medical Institutions.

3. Under Section 45(10)(b) of Rajiv Gandhi University of Health Sciences Act, 1994 read with Rule 12 of the Karnataka Conduct of Entrance Test for Admission to Post Graduate Medical and Dental Degree Courses 2006, the intake in Government Autonomous Medical and Dental Colleges shall be as may be notified by Government from time to time. Hence, the intake of Post Graduate Courses and seat matrix thereof published by the Government applicable for the academic year 2011-12.

4. A consensual agreement has been entered between Government of Karnataka and the Karnataka Private Medical and Dental Colleges Association in the State for regulating admission to Post Graduate Courses in the Professional Colleges for the academic year 2011-12. As per the consensual agreement 33% of the total seats has been earmarked as Government seats in Private Non-Minority Medical and Dental Colleges and 20% of the total seats has been earmarked as Governments seats in Private Minority Medical and Dental Colleges in the State.

5. The fee structure as per the consensual agreement is shown in **ANNEXURE-IX.**

5. Out of total number of Government Post Graduate seats 70% of the seats are earmarked to the entrance test candidates and 30% of the seats are earmarked to the in-service candidates. Out of the 30% Post Graduate seats available for the in-service candidates, the following percentage of seats has been reserved for the candidates working in various Department for the academic year 2011-12.

| Department | PG Medical Degree | PG Medical Diploma | PG Dental Degree |
|---|---|---|---|
| Health and Family Welfare | 77% | 82% | 74% |
| ESI | 10% | 10% | 10% |
| Mahanagara Palike | 5% | 3% | 3% |
| Board and Corporation | 2% | 2% | 2% |
| Autonomous Institutions (Including Government Autonomous Medical and Dental Colleges.) | 6% | 3% | 11% |

8. Now therefore, Government of Karnataka in exercise of powers conferred under Section 45 of the Rajiv Gandhi University of Health Sciences Act, 1994 and sub-section (1) and (2) of the Karnataka Conduct of Entrance Test for Selection and Admission to Post Graduate Medical and Dental Degree and Diploma Courses Rules, 2006 hereby notify the intake capacity of the seats in Post Graduate Medical Degree/Diploma Courses and Post Graduate Dental Degree Courses and the seat matrix thereof. And reservation of seats in favour of (1) All India quota candidates-2011; (2) PG Entrance-2011 candidates; and (3) Government in-service candidates who have appeared and qualified for PGET-2011 in Government/Private Medical/Dental Colleges as specified in **Annexure - I to VIII** appended to this Notification.

9. The Director of Medical Education shall ensure the surrender of 33% of seats by COMED-K institutions and 20% of seats by KRLMPCA institutions as per consensual agreement and it is adhered to in letter and spirit.

By Order and in the name of the Governor of Karnataka,

**B. BHEEMAPPA**

Deputy Secretary to Government,

Health & Family Welfare Department. (Medical Education)

**ANNEXURE-I to Government Notification No.HFW 82 MPS 2011, dated 08.04.2011**

**Statement showing the Seat-matrix of Government Medical Colleges, 2011-12**

| Sl. No. | Subject | Bangalore Medical College & Research Institute, Bangalore. | | | Mysore Medical College & Research Institute, Mysore | | | Karnataka Institute of Medical Sciences, Hubli | | | Vijayanagara Institute of Medical Sciences, Bellary | | |
|---|---|---|---|---|---|---|---|---|---|---|---|---|---|
| | | TS | AIQ | SQ | TS | AIQ | SQ | TS | AIQ | SQ | TS | AIQ | SQ |
| | **Preclinical** | | | | | | | | | | | | |
| 1 | M.D Anatomy | 3 | 2 | 1 | 2 | 1 | 1 | | | | 1 | | 1 |
| 2 | M.D Physiology | 5 | 2 | 3 | 2 | 1 | 1 | 5 | 3 | 2 | 1 | | 1 |
| 3 | M.D Biochemistry | 3 | 2 | 1 | | | | | | | | | |
| | **Para Clinical** | | | | | | | | | | | | |
| 4 | M.D Pharmacology | 5 | 3 | 2 | 4 | 2 | 2 | 1 | | 1 | 2 | 1 | 1 |
| 5 | M.D Pathology | 5 | 2 | 3 | 7 | 4 | 3 | 9 | 5 | 4 | 2 | 1 | 1 |
| 6 | M.D Micro | 3 | 2 | 1 | 5 | 3 | 2 | 3 | 2 | 1 | 5 | 3 | 2 |
| 7 | M.D Com. Medicine. | 3 | 2 | 1 | | | | 1 | | 1 | 1 | 1 | |
| 8 | M.D F.M. | 3 | 2 | 1 | | | | | | | | | |
| | **Clinical** | | | | | | | | | | | | |
| 9 | M.S. Ophthalmology | 10 | 5 | 5 | 3 | 1 | 2 | 3 | 1 | 2 | 2 | 1 | 1 |
| 10 | M.S. ENT | 7 | 3 | 4 | 2 | 1 | 1 | 4 | 2 | 2 | 5 | 2 | 3 |
| 11 | M.S. Ortho | 7 | 3 | 4 | 4 | 2 | 2 | 4 | 2 | 2 | 3 | 2 | 1 |
| 12 | M.D Skin & VD | 5 | 3 | 2 | 2 | 1 | 1 | 1 | 1 | | 2 | 1 | 1 |
| 13 | M.D R.T. | 2 | 1 | 1 | | | | | | | | | |
| 14 | M.D Anesthesia | 9 | 4 | 5 | 6 | 3 | 3 | 4 | 2 | 2 | 3 | 1 | 2 |
| 15 | M.D Pediatrics | 8 | 4 | 4 | 6 | 3 | 3 | 4 | 2 | 2 | 2 | 1 | 1 |
| 16 | M.D. G.M. | 19 | 9 | 10 | 11 | 5 | 6 | 12 | 6 | 6 | 8 | 4 | 4 |

| Sl. No. | Subject | Bangalore Medical College & Research Institute, Bangalore. | | | Mysore Medical College & Research Institute, Mysore | | | Karnataka Institute of Medical Sciences, Hubli | | | Vijayanagara Institute of Medical Sciences, Bellary | | |
|---|---|---|---|---|---|---|---|---|---|---|---|---|---|
| | | TS | AIQ | SQ | TS | AIQ | SQ | TS | AIQ | SQ | TS | AIQ | SQ |
| 17 | M.S. G.S. | 22 | 11 | 11 | 20 | 10 | 10 | 15 | 7 | 8 | 8 | 4 | 4 |
| 18 | M.S. OBG | 7 | 3 | 4 | 4 | 2 | 2 | 4 | 2 | 2 | 6 | 3 | 3 |
| 19 | M.D R.D. | 7 | 3 | 4 | | | | | | | | | |
| 20 | M.D Psychiatry | 2 | 1 | 1 | | | | | | | | | |
| 21 | M.D. T.B. | | | | | | | | | | | | |
| | **TOTAL** | **135** | **67** | **68** | **78** | **39** | **39** | **70** | **35** | **35** | **51** | **25** | **26** |

| Sl. No. | Subject ` | Kidwai Memorial Institute of Oncology, Bangalore | | | Indira Gandhi Institute of Child Health, Bangalore | | | ESI-PGIMSR, Bangalore | | |
|---|---|---|---|---|---|---|---|---|---|---|
| | | TS | AIQ | SQ | TS | AIQ | SQ | TS | AIQ | SQ |
| | **Preclinical** | | | | | | | | | |
| 1 | M.D Anatomy | | | | | | | | | |
| 2 | M.D Physiology | | | | | | | | | |
| 3 | M.D Biochemistry | | | | | | | 2 | 1 | 1 |
| | **Para Clinical** | | | | | | | | | |
| 4 | M.D Pharmacology | | | | | | | | | |
| 5 | M.D Pathology | | | | | | | 2 | 1 | 1 |
| 6 | M.D Micro | | | | | | | 2 | 1 | 1 |
| 7 | M.D Com. Medicine. | | | | | | | | | |
| 8 | M.D F.M. | | | | | | | | | |
| | **Clinical** | | | | | | | | | |
| 9 | M.S. Ophthalmology | | | | | | | | | |
| 10 | M.S. ENT | | | | | | | | | |

